# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1486(1756)

2) ಸದಸ್ಯರ ಹೆಸರು : ಡಾ॥ ಜೈಮಾಲ ರಾಮಚಂದ್ರ (ನಾಮನಿರ್ದೇಶನ ಹೊಂದಿದವರು)

3) ಉತ್ತರಿಸುವ ದಿನಾಂಕ : 23-03-2020

4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 03 ವರ್ಷಗಳಿಂದ ರಾಜ್ಯದಲ್ಲಿ ಎಷ್ಟು ಜನ ಕಾಡಾನೆ ಹಾವಳಿಯಿಂದ ಮೃತಪಟ್ಟಿದ್ದಾರೆ (ಜಿಲ್ಲಾವಾರು ವಿವರ ನೀಡುವುದು) | ಕಳೆದ 3 ವರ್ಷಗಳಲ್ಲಿ ರಾಜ್ಯದಲ್ಲಿ ಕಾಡಾನೆಗಳ ದಾಳಿಯಿಂದ ಉಂಟಾದ ಮಾನವ ಪ್ರಾಣ ಹಾನಿ ಪ್ರಕರಣಗಳ ಜಿಲ್ಲಾವಾರು ವಿವರಗಳನ್ನು **ಅನುಬಂಧ**ದಲ್ಲಿ ಒದಗಿಸಲಾಗಿದೆ. |
| ಆ) | ಕಾಡಾನೆ ಬರುವ ಕಾರಿಡಾರ್‌ನಲ್ಲಿ ಕಬ್ಬು / ತರಕಾರಿ, ಬಾಳೆಗಿಡ ಹಾಕುವ ರೈತರಿಗೆ ಜಾಗೃತಿ ಮೂಡಿಸುವ ಹಾಗೂ ಪರ್ಯಾಯ ಸ್ಥಳಗಳ ಬಗ್ಗೆ ಸರ್ಕಾರ ಕ್ರಮ ತೆಗೆದುಕೊಂಡಿದೆಯೇ; (ವಿವರ ನೀಡುವುದು) | ಕಾಡಂಚಿನ ಗ್ರಾಮಗಳಲ್ಲಿ ಕಬ್ಬು, ತರಕಾರಿ, ಬಾಳೆ ಹಾಗೂ ಇತರೆ ಆನೆಗಳನ್ನು ಆಕರ್ಷಿಸುವ ಬೆಳೆಗಳನ್ನು ಬೆಳೆಯದಿರಲು ಹಾಗೂ ಆನೆಯ ಆಹಾರವಲ್ಲದ ಪರ್ಯಾಯ ಬೆಳೆಗಳನ್ನು ಬೆಳೆಯಲು ಅರಿವು ಮೂಡಿಸಲಾಗುತ್ತಿದೆ. |
| ಇ) | ಮೃತರ ಕುಟುಂಬಕ್ಕೆ ಸರ್ಕಾರದಿಂದ ಎಷ್ಟು ಹಣ ಪರಿಹಾರ ನೀಡಲಾಗಿದೆ; ಬಾಕಿ ಇರುವವರಿಗೆ ಯಾವಾಗ ಪರಿಹಾರ ನೀಡಲಾಗುವುದು; ಪರಿಹಾರ ನೀಡಲು ವಿಳಂಬವಾಗಲು ಕಾರಣವೇನು; (ವಿವರ ನೀಡುವುದು) | ಕಳೆದ 3 ವರ್ಷಗಳಲ್ಲಿ ರಾಜ್ಯದಲ್ಲಿ ಕಾಡಾನೆಗಳ ದಾಳಿಯಿಂದ ಉಂಟಾದ ಮಾನವ ಪ್ರಾಣಹಾನಿ ಪ್ರಕರಣಗಳಲ್ಲಿ ಪಾವತಿಸಲಾದ ದಯಾತ್ಮಕಧನದ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ.<br><br>ಸರ್ಕಾರದ ಆದೇಶದ ಪ್ರಕಾರ ವನ್ಯಜೀವಿ/ಆನೆ ದಾಳಿಯಿಂದ ಮೃತಪಟ್ಟ ವ್ಯಕ್ತಿಯ ವಾರಸುದಾರರಿಗೆ ಘಟನೆ ನಡೆದ ಕೂಡಲೇ ರೂ. 2.00 ಲಕ್ಷಗಳನ್ನು ಪಾವತಿಸಲಾಗುತ್ತಿದ್ದು, ವಾರಸುದಾರರ ದಾಖಲೆಗಳನ್ನು ಪರಿಶೀಲಿಸಿ ಉಳಿದ ಮೊತ್ತವನ್ನು ಪಾವತಿಸಲಾಗುತ್ತಿದೆ. ದಿನಾಂಕ: 15-03-2020ರವರೆಗೆ ಮಾನವ ಪ್ರಾಣಹಾನಿ ಪ್ರಕರಣಗಳಲ್ಲಿ ದಯಾತ್ಮಕಧನ ಪಾವತಿಸಲು ಯಾವುದೇ ಪ್ರಕರಣ ಬಾಕಿ ಇರುವುದಿಲ್ಲ. |
| ಈ) | ಕಾಡಾನೆ ಹಾವಳಿ ತಡೆಯಲು ಸರ್ಕಾರ ತೆಗೆದುಕೊಂಡ ಕ್ರಮವೇನು; ಇದಕ್ಕಾಗಿ ಮೀಸಲಿಟ್ಟ ಅನುದಾನವೆಷ್ಟು? (ಜಿಲ್ಲಾವಾರು ವಿವರ ನೀಡುವುದು) | ಕಾಡಾನೆ ಹಾವಳಿಯನ್ನು ತಡೆಯಲು ಇಲಾಖೆಯ ವತಿಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br><br>I. ರಾಜ್ಯದಲ್ಲಿರುವ ವನ್ಯಜೀವಿಗಳಿಗೆ ಸಂಪೂರ್ಣ ರಕ್ಷಣೆ ನೀಡುವ ಸಲುವಾಗಿ ರಾಷ್ಟ್ರೀಯ ಉದ್ಯಾನವನ, ಅಭಯಾರಣ್ಯ, ಹುಲಿ ಮೀಸಲು ಅರಣ್ಯ, ಸಂರಕ್ಷಿತ ಮೀಸಲು ಅರಣ್ಯಗಳನ್ನು ಘೋಷಿಸಲಾಗಿರುತ್ತದೆ. |

| | | | |
|---|---|---|---|
| | | | 2. ವನ್ಯಪ್ರಾಣಿಗಳಿಗಾಗಿ ಅರಣ್ಯ ಪ್ರದೇಶಗಳ ಒಳಗೆ ನೀರಿನ ಲಭ್ಯ ಹೆಚ್ಚಿಸಲು ರಕ್ಷಿತಾರಣ್ಯಗಳಲ್ಲಿ ಕೆರೆಗಳ ನಿರ್ಮಾಣ ಹಾಗೂ ಪುನಶ್ಚೇತನಗೊಳಿಸಿ ವನ್ಯಪ್ರಾಣಿಗಳ ಆವಾಸಸ್ಥಾನವನ್ನು ಅಭಿವೃದ್ಧಿಗೊಳಿಸಲಾಗುತ್ತಿದೆ. ಇದರಿಂದ ಕಾಡಾನೆ ಹಾಗೂ ಇತರೆ ವನ್ಯಪ್ರಾಣಿಗಳು ಕಾಡಿನಿಂದ ಹೊರಗೆ ಬಾರದಂತೆ ತಡೆಯಲಾಗುತ್ತಿದೆ.<br>3. ಅರಣ್ಯ ಪ್ರದೇಶಗಳಲ್ಲಿ ಹುಲ್ಲುಗಾವಲು ಸಂರಕ್ಷಣೆ ಹಾಗೂ ಅಭಿವೃದ್ಧಿಗೊಳಿಸಲು, 2019-20ನೇ ಸಾಲಿನಲ್ಲಿ ರೂ.5.00 ಕೋಟಿ ವೆಚ್ಚದಲ್ಲಿ ಲಂಟಾನ ಮತ್ತು ಯುಪಟೋರಿಯಂ ಕಳೆಗಳ ನಿರ್ಮೂಲನೆ ಎಂಬ ಹೊಸ ಕಾರ್ಯಕ್ರಮ/ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ.<br>4. ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಸೌರಶಕ್ತಿ ಬೇಲಿ ನಿರ್ಮಾಣ/ನಿರ್ವಹಣೆ, ಆನೆತಡೆ ಕಂದಕ ನಿರ್ಮಾಣ/ನಿರ್ವಹಣೆ ಮಾಡಲಾಗಿರುತ್ತದೆ ಮತ್ತು ರೈಲ್ವೆ ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>5. ಕಳ್ಳಬೇಟೆ ತಡೆ ಶಿಬಿರಗಳಿಗೆ ಹಾಗೂ Rapid Response Teams (RRT) ಗಳನ್ನು, ಅಂದರೆ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ ಹಾಗೂ Wireless Networking ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ.<br>6. ಕಾಡಾನೆಗಳ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಮಾಹಿತಿ ಕೇಂದ್ರ ಸ್ಥಾಪಿಸಲಾಗಿದೆ.<br>7. ಕಾಡಾನೆ ಗುಂಪಿನ ಒಂದು ವಯಸ್ಕ ಹೆಣ್ಣಾನೆಯನ್ನು ಗುರುತಿಸಿ, ಅದಕ್ಕೆ ರೇಡಿಯೋ ಕಾಲರ್ ಅಳವಡಿಸಿ ಆನೆಗಳ ಚಲನವಲನಗಳ ಬಗ್ಗೆ ಎಸ್.ಎಂ.ಎಸ್. ಹಾಗೂ ವಾಟ್ಸಾಪ್ ಮೂಲಕ ಜನರಿಗೆ ಮಾಹಿತಿಯನ್ನು ನೀಡಿ ಮಾನವ ಪ್ರಾಣಹಾನಿ ಹಾಗೂ ಮಾನವಗಾಯ ಪ್ರಕರಣಗಳನ್ನು ತಪ್ಪಿಸಲು ಕ್ರಮ ವಹಿಸಲಾಗುತ್ತಿದೆ.<br>8. ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಪುಂಡಾನೆಗಳನ್ನು ಸೆರೆಹಿಡಿದು ಆಗ್ಗಿಂದಾಗ್ಗೆ ಆನೆ ಶಿಬಿರಗಳಿಗೆ ಕಳುಹಿಸಲಾಗಿರುತ್ತದೆ. 2016-17ರಿಂದ ಇಲ್ಲಿಯವರೆಗೆ 23 ಪುಂಡಾನೆಗಳನ್ನು ಸೆರೆಹಿಡಿದು ಆನೆಶಿಬಿರಗಳಿಗೆ ಸ್ಥಳಾಂತರಿಸಲಾಗಿದೆ.<br>9. ಇತ್ತೀಚಿನ ದಿನಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಹಾನಿ ಪ್ರಕರಣಗಳಿಗೆ ಇ-ತಂತ್ರಾಂಶದ ಮೂಲಕ ಅರ್ಜಿಗಳನ್ನು ಸ್ವೀಕರಿಸಲಾಗುತ್ತಿದ್ದು, ನಿಯಮಾನುಸಾರ ಪರಿಶೀಲಿಸಿ ಆದ್ಯತೆ ಮೇರೆಗೆ ನೇರವಾಗಿ ಸಂತ್ರಸ್ತರ ಖಾತೆಗೆ ದಯಾತ್ಮಕಧನ ಪಾವತಿಸುವ ಪ್ರಕ್ರಿಯೆಯನ್ನು ಇ-ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ. |

ಮಾನವ-ಕಾಡಾನೆ ಸಂಘರ್ಷ ನಿಯಂತ್ರಣಕ್ಕಾಗಿ ಕೇಂದ್ರ ಪುರಸ್ಕೃತ ಆನೆಯೋಜನೆಯಡಿ 2019-20ನೇ ಸಾಲಿಗೆ ರೂ.773.62ಲಕ್ಷ ಹಂಚಿಕೆ ಮಾಡಿದ್ದು, ಜಿಲ್ಲಾವಾರು/ವಿಭಾಗವಾರು ವಿವರಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಜಿಲ್ಲೆ/ವಿಭಾಗದ ಹೆಸರು | ಹಂಚಿಕೆ ಮಾಡಲಾಗಿರುವ ಅನುದಾನ |
|---|---|---|
| 1. | ಮೈಸೂರು (ಪ್ರಾ) | 62.75 |
| 2. | ಹುಣಸೂರು (ಪ್ರಾ) | 4.50 |
| 3. | ಚಿಕ್ಕಮಗಳೂರು (ಪ್ರಾ) | 29.16 |
| 4. | ಭದ್ರಾ ಹು.ಯೋ. | 19.87 |
| 5. | ವೀರಾಜಪೇಟೆ (ಪ್ರಾ) | 23.46 |
| 6. | ಮಡಿಕೇರಿ (ಪ್ರಾ) | 79.00 |
| 7. | ಮಡಿಕೇರಿ ವಜೀ | 8.60 |
| 8. | ಮಂಗಳೂರು (ಪ್ರಾ) | 5.60 |
| 9. | ಬನ್ನೇರುಘಟ್ಟ ವಜೀ | 39.43 |
| 10. | ಕೋಲಾರ (ಪ್ರಾ) | 20.05 |
| 11. | ರಾಮನಗರ (ಪ್ರಾ) | 38.75 |
| 12. | ಬಂಡೀಪುರ ಹು.ಯೋ. | 53.28 |
| 13. | ನಾಗರಹೊಳೆ ಹು.ಯೋ | 37.24 |
| 14. | ಬಿ.ಆರ್.ಟಿ. ಹು.ಯೋ. | 25.90 |
| 15. | ಕಾವೇರಿ ವಜೀ | 108.49 |
| 16. | ಮ. ಮ. ಬೆಟ್ಟ ವಜೀ | 105.73 |
| 17. | ಶಿವಮೊಗ್ಗ ವಜೀ | 41.43 |
| 18. | ತುಮಕೂರು (ಪ್ರಾ) | 10.60 |
| 19. | ಹಾಸನ (ಪ್ರಾ) | 17.85 |
| 20. | ದಾಂಡೇಲಿ ಹು.ಯೋ. | 11.10 |
| 21. | ಬೆಳಗಾವಿ (ಪ್ರಾ) | 30.83 |
| | ಒಟ್ಟು: | 773.62 |

ಸಂಖ್ಯೆ: ಅಪಜೀ 76 ಎಫ್‌ಡಬ್ಲ್ಯೂಎಲ್ 2020

20/12/2020

(ಆನಂದ್ ಸಿಂಗ್)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ಅನುಬಂಧ–1

ಕಳೆದ 3 ವರ್ಷಗಳಲ್ಲಿ ರಾಜ್ಯದಲ್ಲಿ ಕಾಡಾನೆಗಳ ದಾಳಿಯಿಂದ ಉಂಟಾದ ಮಾನವ ಪ್ರಾಣ ಹಾನಿ ಪ್ರಕರಣಗಳ ಜಿಲ್ಲಾವಾರು ವಿವರ

(ಮೊತ್ತ ರೂ.ಲಕ್ಷಗಳಲ್ಲಿ)

| ಕ್ರ.ಸಂ. | ವಿಭಾಗ / ಜಿಲ್ಲೆ | 2017–18 | | 2018–19 | | 2019–20 | |
|---|---|---|---|---|---|---|---|
| | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 1. | ರಾಮನಗರ | 2 | 10.00 | 1 | 5.00 | 2 | 10.00 |
| 2. | ಬೆಂಗಳೂರು ಗ್ರಾ | – | – | – | – | 1 | 5.00 |
| 3. | ಬನ್ನೇರುಘಟ್ಟ | 3 | 15.00 | – | – | 1 | 7.50 |
| 4. | ಕೋಲಾರ | – | – | 1 | 5.00 | 3 | 22.50* |
| 5. | ಚಿತ್ರದುರ್ಗ | 2 | 10.00 | – | – | – | – |
| 6. | ಬಿ.ಆರ್.ಟಿ | 1 | 5.00 | 3 | – | 1 | – |
| 7. | ಕಾವೇರಿ | – | – | 1 | 5.00 | 1 | 5.00 |
| 8. | ಮಲೈ ಮಹದೇಶ್ವರ | – | – | 1 | 5.00 | 4 | 20.00 |
| 9. | ಚಿಕ್ಕಮಗಳೂರು | – | – | 2 | 10.00 | 2 | 10.00 |
| 10. | ಬಂಡೀಪುರ | 1 | 5.00 | 1 | 5.00 | 3 | 17.50* |
| 11. | ನಾಗರಹೊಳೆ | – | – | 1 | 5.00 | – | – |
| 12. | ಹಾಸನ | 5 | 25.00 | 1 | 5.00 | 3 | 15.00 |
| 13. | ತುಮಕೂರು | – | – | – | – | 1 | 7.50 |
| 14. | ಮಡಿಕೇರಿ | 3 | 15.00 | – | – | 2 | 12.50 |
| 15. | ಮಡಿಕೇರಿ ವಜೀ | – | – | – | – | 1 | 5.00 |
| 16. | ವಿರಾಜಪೇಟೆ | 2 | 10.00 | – | – | – | – |
| 17. | ಮೈಸೂರು | – | – | – | – | 1 | 5.00 |
| 18. | ಭದ್ರಾವತಿ | 3 | 15.00 | – | – | – | – |
| | **ಒಟ್ಟು** | **22** | **110.00** | **12** | **60.00** | **26** | **142.50** |

* ಸರ್ಕಾರದ ಆದೇಶ ಸಂಖ್ಯೆ: ಅಪಜೀ–66–ಎಫ್‌ಡಬ್ಲ್ಯುಎಲ್–2019 ದಿನಾಂಕ: 07–01–2020ರ ಪ್ರಕಾರ ವನ್ಯಪ್ರಾಣಿಗಳಿಂದ ಮೃತಪಟ್ಟಿರುವ ವ್ಯಕ್ತಿಯ ವಾರಸುದಾರರಿಗೆ ಪಾವತಿಸುತ್ತಿರುವ ದಯಾತ್ಮಕ ಧನವನ್ನು ರೂ. 5,00,000/–ಗಳಿಂದ ರೂ.7,50,000/– ಗಳಿಗೆ ಹೆಚ್ಚಿಸಿ ಆದೇಶಿಸಿದ್ದು, ಅದರಂತೆ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದೆ.